**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 593**

ಸದಸ್ಯರ ಹೆಸರು : ಶ್ರೀ ಎಸ್. ರವಿಕುಮಾರ್

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 17.12.2021

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಸಾರಿಗೆ ಇಲಾಖೆಯಲ್ಲಿ ನಿರ್ಭಯ ನಿಧಿಯ ಅನ್ವಯ ಬಿಡುಗಡೆಯಾಗಿರುವ ಅನುದಾನವನ್ನು ಕಳೆದ 3 ವರ್ಷಗಳಲ್ಲಿ ಯಾವ ರೀತಿಯಲ್ಲಿ ವೆಚ್ಚ ಮಾಡಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು)</td><td>ಕ.ರಾ.ರ.ಸಾ.ನಿಗಮ, ವಾ.ಕ.ರ.ಸಾ.ಸಂಸ್ಥೆ ಮತ್ತು ಕ.ಕ.ರ.ಸಾ.ನಿಗಮಗಳಿಗೆ ನಿರ್ಭಯಾ ನಿಧಿ ಯೋಜನೆಯಡಿ ಕಳೆದ 3 ವರ್ಷಗಳಲ್ಲಿ ಯಾವುದೇ ಅನುದಾನವನ್ನು ಒದಗಿಸಲಾಗಿರುವುದಿಲ್ಲ.<br><br>ಬೆಂ.ಮ.ಸಾ.ಸಂಸ್ಥೆಯಲ್ಲಿ ಕಳೆದ 3 ವರ್ಷಗಳಲ್ಲಿ ನಿರ್ಭಯಾ ನಿಧಿಯಡಿ ಬಿಡುಗಡೆಯಾದ ಹಾಗೂ ವೆಚ್ಚವಾದ ಯೋಜನವಾರು ಮತ್ತು ವರ್ಷವಾರು ವಿವರವನ್ನು 'ಅನುಬಂಧ-ಅ'ರಲ್ಲಿ ನೀಡಲಾಗಿದೆ.</td></tr>
<tr><td>ಆ</td><td>ಬಸ್ಸುಗಳಲ್ಲಿ ಸಿ.ಸಿ.ಟಿ.ವಿ ಅಳವಡಿಕೆಗಾಗಿ ಮಾಡಿರುವ ವೆಚ್ಚ ಎಷ್ಟು; ಎಷ್ಟು ಬಸ್ಸುಗಳಲ್ಲಿ ಸಿ.ಸಿ.ಟಿ.ವಿ ಅಳವಡಿಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು)</td><td>ಕ.ರಾ.ರ.ಸಾ.ನಿಗಮ<br><br>ಕ.ರಾ.ರ.ಸಾ.ನಿಗಮದಿಂದ 2016-17 ಹಾಗೂ 2017-18ನೇ ಸಾಲಿನಲ್ಲಿ ಜೆ.ಎನ್.ನರ್ಮ್ ಯೋಜನೆಯ ಸ್ಪೆಸಿಫಿಕೇಷನ್ ನಂತೆ ಖರೀದಿಸಲಾಗಿರುವ ಒಟ್ಟು 487 ಪೂರ್ಣ ನಿರ್ಮಿತ ನಗರ ಸಾರಿಗೆ ವಾಹನಗಳಲ್ಲಿ ಸಿ.ಸಿ.ಟಿ.ವಿಗಳು ಒಳಗೊಂಡಿದ್ದು, ಪ್ರತ್ಯೇಕವಾಗಿ ವೆಚ್ಚ ಮಾಡಿರುವುದಿಲ್ಲ.<br><br>ವಿಭಾಗವಾರು ಹಂಚಿಕೆ ಮಾಡಿರುವ ನಗರ ಸಾರಿಗೆ ವಾಹನಗಳ ವಿವರ ಕೆಳಕಂಡಂತಿದೆ:<br><br><table><tr><th>ವಿಭಾಗ</th><th>ಪರಿಮಾಣ</th></tr><tr><td>ಚಾಮರಾಜನಗರ</td><td>5</td></tr><tr><td>ಚಿತ್ರದುರ್ಗ</td><td>24</td></tr><tr><td>ದಾವಣಗೆರೆ</td><td>56</td></tr></table></td></tr>
</table>

| | |
|---|---|
| | 35 |
| ಹಾಸನ | 40 |
| ಕೋಲಾರ | 20 |
| ಮಂಡ್ಯ | 85 |
| ಮಂಗಳೂರು | 20 |
| ರಾಮನಗರ | 60 |
| ಶಿವಮೊಗ್ಗ | 49 |
| ತುಮಕೂರು | 93 |
| ಮೈಸೂರು | 487 |
| ಒಟ್ಟು | |

ಬೆಂ.ಮ.ಸಾ.ಸಂಸ್ಥೆ:-

ಬೆಂ.ಮ.ಸಾ.ಸಂಸ್ಥೆಯು 2014ನೇ ಸಾಲಿನಲ್ಲಿ ಮಹಿಳೆಯರು ಮತ್ತು ಮಕ್ಕಳ ಸುರಕ್ಷತೆಯ ದೃಷ್ಟಿಯಿಂದ ಪ್ರತಿ ಬಸ್ಸಿಗೆ ಮೂರು ವರ್ಷಗಳ ನಿರ್ವಹಣೆ ಸೇರಿದಂತೆ ರೂ.68,000/- ವೆಚ್ಚದಲ್ಲಿ 500 ಬಸ್ಸುಗಳಲ್ಲಿ ಸಿಸಿ ಕ್ಯಾಮರಾಗಳನ್ನು ಅಳವಡಿಸಲಾಗಿರುತ್ತದೆ. ಮುಂದುವರೆದು, ನಿರ್ಭಯ ಯೋಜನೆಯಡಿಯಲ್ಲಿ ರೂ.6.8 ಕೋಟಿ ವೆಚ್ಚದಲ್ಲಿ ಸಂಸ್ಥೆಯ 5000 ಬಸ್ಸುಗಳಲ್ಲಿ ಸಿಸಿ ಕ್ಯಾಮರಾಗಳನ್ನು ಅಳವಡಿಸಲು ಯೋಜಿಸಲಾಗಿದೆ.

ವಾ.ಕ.ರ.ಸಾ.ಸಂಸ್ಥೆ:-

ಪ್ರಸ್ತುತ ಸಂಸ್ಥೆಯಲ್ಲಿ ಟೆಂಡರ್‌ನಲ್ಲಿನ ಷರತ್ತು ಹಾಗೂ ನಿಬಂಧನೆಗಳನ್ವಯ ಖರೀದಿಸಲಾದ 100 ವೋಲ್ವೋ ಯು.ಡಿ. ಹಾಗೂ ಜೆ-ನರ್ಮ್ ಅಡಿಯಲ್ಲಿ 280 ಮಿಡಿ ಬಸ್ಸುಗಳಲ್ಲಿ ಸಿ.ಸಿ. ಟಿ.ವಿ. ಕ್ಯಾಮರಾಗಳನ್ನು ಅಳವಡಿಸಲಾಗಿದೆ. ಆದರೆ ಸದರಿ ಬಸ್ಸುಗಳಲ್ಲಿ ಸಿ.ಸಿ. ಟಿ.ವಿ. ಕ್ಯಾಮರಾ ಅಳವಡಿಸಲು ಪ್ರತ್ಯೇಕ ವೆಚ್ಚವನ್ನು ಮಾಡಿರುವುದಿಲ್ಲ. ಸಿ.ಸಿ.ಟಿ.ವಿ. ಅಳವಡಿಸಿದ ಜಿಲ್ಲಾವಾರು ಮಾಹಿತಿ ಈ ಕೆಳಗಿನಂತಿದೆ.

| ಕ್ರ. ಸಂ | ಜಿಲ್ಲೆ | ಜೆ-ನರ್ಮ್ ಮಿಡಿ ಬಸ್ಸು | ವೋಲ್ವೊ ಯು.ಡಿ. |
|---|---|---|---|
| 01 | ಗದಗ | 00 | 00 |
| 02 | ಬೆಳಗಾವಿ | 70 | 00 |
| 03 | ಕಾರವಾರ | 40 | 00 |

| | | | |
|---|---|---|---|
| 04 | ಬಾಗಲಕೋಟೆ | 20 | 00 |
| 05 | ಹಾವೇರಿ | 30 | 00 |
| 06 | ಧಾರವಾಡ | 170 | 100 |
| | ಒಟ್ಟು | 280 | 100 |

| | | |
|---|---|---|
| ಉ | ಸಾರಿಗೆ ಇಲಾಖೆಯು ಮಹಿಳಾ ಪ್ರಯಾಣಿಕರ ಸುರಕ್ಷತೆಗಾಗಿ ಕೈಗೊಂಡ ಕ್ರಮಗಳೇನು; ಮಹಿಳಾ ಪ್ರಯಾಣಿಕರಿಗಾಗಿ ಯಾವ ಯಾವ ಸೌಲಭ್ಯಗಳನ್ನು ನೀಡಲಾಗುತ್ತದೆ; | ನಾಲ್ಕೂ ಸಾರಿಗೆ ನಿಗಮಗಳ ನಿಲ್ದಾಣಗಳಲ್ಲಿ ಮತ್ತು ಬಸ್ಸುಗಳಲ್ಲಿ ಮಹಿಳಾ ಪ್ರಯಾಣಿಕರ ಸುರಕ್ಷತೆಯ ಬಗ್ಗೆ ನಿಗಮದ ಸಿಬ್ಬಂದಿಗಳಿಗೆ ನೀಡಿರುವ ನಿರ್ದೇಶನಗಳನ್ನು ಹಾಗೂ ಕಲ್ಪಿಸಿರುವ ಸೌಲಭ್ಯಗಳ ವಿವರಗಳನ್ನು ಅನುಬಂಧ-ಆ ರಲ್ಲಿ ನೀಡಲಾಗಿದೆ. |
| ಊ | ದೂರದ ಊರುಗಳಿಗೆ ಪ್ರಯಾಣಿಸುವ ರಾತ್ರಿ ಬಸ್ಸುಗಳು ರಸ್ತೆ ಬದಿಯ ಡಾಬಾಗಳಲ್ಲಿ ನಿಲ್ಲಿಸುವುದರಿಂದ ಮಹಿಳಾ ಪ್ರಯಾಣಿಕರಿಗೆ ಅನಾನುಕೂಲಗಳು ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಡಾಬಾಗಳ ಶೌಚಾಲಯಗಳು ತುಂಬಾ ಕೊಳಕಾಗಿರುವುದರಿಂದ ಮಹಿಳಾ ಪ್ರಯಾಣಿಕರು ಅನಾರೋಗ್ಯಕ್ಕೆ ತುತ್ತಾಗುತ್ತಿರುವ ಪ್ರಕರಣಗಳ ಕುರಿತು ಇಲಾಖೆಯ ನಿಲುವೇನು? | ದೂರದ ಊರುಗಳ ಪ್ರಯಾಣಿಕರ ಅನುಕೂಲಕ್ಕಾಗಿ ಮಾರ್ಗ ಮಧ್ಯ ಅಧಿಕೃತ ಹೋಟೆಲ್‌ಗಳನ್ನು ಗುರುತಿಸಿ ನಿಲುಗಡೆ ನೀಡಲು ಕ್ರಮ ವಹಿಸಲಾಗಿರುತ್ತದೆ. ಅಂತಹ ಹೋಟೆಲ್‌ಗಳಲ್ಲಿ ಶೌಚಾಲಯಗಳು ಉತ್ತಮವಾಗಿರುತ್ತವೆ ಹಾಗೂ ನಿಯಮಿತವಾಗಿ ತಪಾಸಣೆ ಮಾಡಲು ಹಾಗೂ ದೂರುಗಳ ಬಗ್ಗೆ ದಂಡ ವಿಧಿಸಲು ಸಹ ಕ್ರಮವಹಿಸಲಾಗಿದೆ. ಆದಾಗ್ಯೂ, ಅನಧಿಕೃತ ನಿಲುಗಡೆ ನೀಡುತ್ತಿರುವುದು ಕಂಡುಬಂದಲ್ಲಿ, ಅಂತಹ ಸಿಬ್ಬಂದಿಗಳ ವಿರುದ್ಧ ಕ್ರಮ ವಹಿಸಲಾಗುವುದು ಹಾಗೂ ಉತ್ತಮ ಹೋಟೆಲ್‌ಗಳ ಬಳಿ ನಿಲುಗಡೆ ನೀಡುವ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳಲಾಗಿದೆ. |

ಸಂಖ್ಯೆ: ಟಿಡಿ 282 ಟಿಸಿಕ್ಯೂ 2021

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

# ಅನುಬಂಧ-ಅ

(ರೂ. ಕೋಟಿಗಳಲ್ಲಿ)

| ಕ್ರ. ಸಂ. | ಯೋಜನೆ ಹೆಸರು | 2018-19 | | 2019-20 | | 2020-21 | | ಒಟ್ಟು | | |
|---|---|---|---|---|---|---|---|---|---|---|
| | | ಬಿಡುಗಡೆ ಯಾದ ಅನುದಾನ | ವೆಚ್ಚ | ಬಿಡುಗಡೆ ಯಾದ ಅನುದಾನ | ವೆಚ್ಚ | ಬಿಡುಗಡೆ ಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ | ಉಳಿಕೆ |
| 1 | ಮಹಿಳೆಯರಿಗೆ ಲಘು ವಾಹನ ಚಾಲನಾ ತರಬೇತಿ<br>1) ತರಬೇತಿ ವಾಹನಗಳ ಖರೀದಿ | 0.48 | 0.00 | 032 | 0.73 | 0.00 | 0.00 | 0.80 | 0.73 | 0.07 |
| | 2) ತರಬೇತಿ | 0.97 | 0.00 | 0.64 | 0.70 | 0.00 | 0.84 | 1.61 | 1.54 | 0.07 |
| 2 | ಅ) ಚಾಲನಾ ಸಿಬ್ಬಂದಿಗಳಿಗೆ "ಲಿಂಗ ಸಂವೇದನೆ ತರಬೇತಿ" ಹಾಗೂ ರಕ್ಷಣಾ ಕ್ರಮಗಳು | 0.42 | 0.00 | 0.28 | 0.27 | 0.00 | 0.21 | 0.70 | 0.48 | 0.22 |
| | ಆ) ಲಿಂಗ ಸಂವೇದನಾ ತರಬೇತಿ ಅಸೆಸ್‌ಮೆಂಟ್ ಟೂಲ್ ಅಭಿವೃದ್ಧಿ. | 1.73 | 0.00 | 1.16 | 0.00 | 0.00 | 0.00 | 2.89 | 0.00 | 2.89 |
| 3 | ಸಂಸ್ಥೆಯ 3000 ಮಹಿಳಾ ನೌಕರರುಗಳಿಗೆ ಸ್ವರಕ್ಷಣಾ ತರಬೇತಿ | 1.08 | 0.00 | 0.72 | 0.00 | 0.00 | 0.00 | 1.80 | 0.00 | 1.80 |
| 4 | ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಕೊಠಡಿಗಳ ನಿರ್ಮಾಣ | 1.35 | 0.00 | 0.90 | 0.68 | 0.00 | 0.76 | 2.25 | 1.44 | 0.81 |
| 5 | ಮಹಿಳಾ ಪ್ರಯಾಣಿಕರ ಸುರಕ್ಷತೆ ಮತ್ತು ಭದ್ರತೆಗಾಗಿ 25 ಪಿಂಕ್ ಸಾರಥಿ ವಾಹನಗಳ ಖರೀದಿ. | 2.58 | 2.04 | 1.72 | 2.26 | 0.00 | 0.00 | 4.30 | 4.30 | 0.00 |
| 6 | ಮಹಿಳೆಯರ ಸುರಕ್ಷತೆ ಬಗ್ಗೆ ಜಾಹೀರಾತು ಮತ್ತು ಜಾಗೃತಿ ಅಭಿಯಾನ | 0.48 | 0.00 | 0.32 | 0.22 | 0.00 | 0.58 | 0.80 | 0.80 | 0.00 |
| 7 | ಸಂಸ್ಥೆಯ 5000 ಬಸ್ಸಗಳಲ್ಲಿ ಸಿ.ಸಿ. ಕ್ಯಾಮರಾ ಅಳವಡಿಕೆ | 4.08 | 0.00 | 2.72 | 0.00 | 0.00 | 0.00 | 6.80 | 0.00 | 6.80 |
| 8 | ಮಹಿಳೆಯರ ಸುರಕ್ಷತಾ ವೈಶಿಷ್ಟ್ಯಗಳುಳ್ಳ ಮೊಬೈಲ್ ಆಪ್(App). | 15.91 | 0.00 | 10.61 | 0.00 | 0.00 | 0.18 | 26.52 | 0.18 | 26.34 |
| 9 | ಬಸ್ ನಿಲ್ದಾಣಗಳಲ್ಲಿ ಪ್ರಯಾಣಿಕರ ಮಾಹಿತಿ ಪ್ರದರ್ಶನ ಅಳವಡಿಕೆ. | 4.56 | 0.00 | 3.04 | 0.00 | 0.00 | 0.00 | 7.60 | 0.00 | 7.60 |
| | **ಒಟ್ಟು** | **33.64** | **2.04** | **22.43** | **4.86** | **0.00** | **2.57** | **56.07** | **9.47** | **46.60** |

**ಅನುಬಂಧ-ಆ**

**ನಿಲ್ದಾಣದಲ್ಲಿ ಮತ್ತು ಬಸ್ಸುಗಳಲ್ಲಿ ಮಹಿಳಾ ಪ್ರಯಾಣಿಕರ ಸುರಕ್ಷತೆಯ ಬಗ್ಗೆ ನಿಗಮದ ಸಿಬ್ಬಂದಿಗಳಿಗೆ ನೀಡಿರುವ ನಿರ್ದೇಶನಗಳನ್ನು ಹಾಗೂ ಕಲ್ಪಿಸಿರುವ ಸೌಲಭ್ಯಗಳ ವಿವರಗಳು**

**ಕ.ರಾ.ರ.ಸಾ.ನಿಗಮ, ವಾ.ಕ.ರ.ಸಾ.ಸಂಸ್ಥೆ ಮತ್ತು ಕ.ಕ.ರ.ಸಾ.ನಿಗಮ:-**

- ಮಹಿಳಾ ಪ್ರಯಾಣಿಕರೊಂದಿಗೆ ಸೌಜನ್ಯದಿಂದ ವರ್ತಿಸುವುದು.ಮಹಿಳಾ ಪ್ರಯಾಣಿಕರಿಗೆ ಅನುಕೂಲ ಮಾಡಿಕೊಡುವ ದೃಷ್ಠಿಯಿಂದ ನಿಗಮದ ಸಾರಿಗೆಗಳಲ್ಲಿ ಮಹಿಳೆಯರಿಗೆ ಪ್ರತ್ಯೇಕ ಆಸನಗಳನ್ನು ಮೀಸಲಿರಿಸಲಾಗಿದೆ.
- ಎಲ್ಲಾ ನಿಗದಿತ ಸ್ಥಳಗಳಲ್ಲಿ ನಿಲುಗಡೆ ನೀಡಿ ಮಹಿಳಾ ಪ್ರಯಾಣಿಕರು ಹತ್ತಿ/ಇಳಿಯಲು ಅನುಕೂಲ ಮಾಡಿಕೊಡಲಾಗಿದೆ.
- ಮಹಿಳಾ ಪ್ರಯಾಣಿಕರು ಚಿಕ್ಕ ಮಕ್ಕಳು ಅಥವಾ ಲಗೇಜುಗಳನ್ನು ಹೊಂದಿದ ಪಕ್ಷದಲ್ಲಿ ಸದರಿಯವರು ಬಸ್ಸಿನೊಳಗೆ ಹತ್ತುವಾಗ/ಇಳಿಯುವಾಗ ಮಕ್ಕಳನ್ನು ಅಥವಾ ಲಗ್ಗೇಜುಗಳನ್ನು ಹತ್ತಿಸಲು/ಇಳಿಸಲು ಸಹಕರಿಸುವಂತೆ ಸೂಚಿಸಲಾಗಿದೆ.
- ಬಸ್ಸಿನ ಸೀಟಿನಲ್ಲಿ ಒಂಟಿ ಮಹಿಳೆ ಪ್ರಯಾಣಿಸುತ್ತಿದ್ದಲ್ಲಿ ಪಕ್ಕದ ಸೀಟಿನಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಮತ್ತೊಬ್ಬ ಮಹಿಳಾ ಪ್ರಯಾಣಿಕರನ್ನು ಪ್ರಯಾಣಿಸಲು ಅವಕಾಶ ಮಾಡಿಕೊಡುವಂತೆ ತಿಳಿಸಲಾಗಿದೆ.
- ಮಹಿಳಾ ಪ್ರಯಾಣಿಕರೊಂದಿಗೆ ಅನಾವಶ್ಯಕ ಚರ್ಚೆಗೆ ಅವಕಾಶ ನೀಡಬಾರದು.
- ಮಹಿಳಾ ಪ್ರಯಾಣಿಕರೊಂದಿಗೆ ಇತರೆ ಪುರುಷ ಪ್ರಯಾಣಿಕರು ಅಸಭ್ಯವಾಗಿ ವರ್ತಿಸಿದಲ್ಲಿ ಮಹಿಳಾ ಪ್ರಯಾಣಿಕರೊಂದಿಗೆ ಸೌಜನ್ಯಯುತವಾಗಿ ವರ್ತಿಸುವಂತೆ ಪುರುಷ ಪ್ರಯಾಣಿಕರಿಗೆ ತಿಳುವಳಿಕೆ ನೀಡುವುದು. ಕೇಳದಿದ್ದ ಪಕ್ಷದಲ್ಲಿ ಹತ್ತಿರದ ಪೋಲೀಸ ಠಾಣೆಗೆ ಹೋಗಿ ಸದರಿಯವರ ವಿರುದ್ಧ ದೂರು ನೀಡುವುದು.
- ರಾತ್ರಿ ವೇಳೆಯ ಸಾರಿಗೆಗಳನ್ನು ಮಾರ್ಗ ಮಧ್ಯದಲ್ಲಿ ಊಟ/ವಿಶ್ರಾಂತಿಗಾಗಿ ನಿಲ್ಲಿಸುವಾಗ ಉತ್ತಮವಾದ ಶೌಚಾಲಯಗಳಿರುವ ನಿಗಮವು ನಿಗದಿಪಡಿಸಿರುವ ಹೋಟೆಲ್‌ಗಳ ಬಳಿ ನಿಲ್ಲಿಸುವುದು.
- ಮಹಿಳಾ ಪ್ರಯಾಣಿಕರು ಬಂದು ಮಾಹಿತಿಯನ್ನು ಕೇಳಿದ ಪಕ್ಷದಲ್ಲಿ ಅವರೊಂದಿಗೆ ಸೌಹಾರ್ದ ರೀತಿಯಿಂದ ವರ್ತಿಸುವುದು.
- ಬಸ್ ನಿಲ್ದಾಣಗಳಲ್ಲಿ ಇರುವ ಮಹಿಳಾ ವಿಶ್ರಾಂತಿ ಕೊಠಡಿಗಳಲ್ಲಿ ಹಾಗೂ ಬಸ್ ನಿಲ್ದಾಣಗಳಲ್ಲಿ ರಾತ್ರಿ ವೇಳೆಯಲ್ಲಿ ಬೆಳಕಿನ ವ್ಯವಸ್ಥೆಯನ್ನು ಯಾವಾಗಲೂ ಸರಿಯಾಗಿರುವಂತೆ ನೋಡಿಕೊಳ್ಳುವುದು.
- ಗ್ರಾಮಾಂತರ ಪ್ರದೇಶಗಳ ಬಸ್ ನಿಲ್ದಾಣಗಳಲ್ಲಿ ಮಹಿಳಾ ಪ್ರಯಾಣಿಕರು ಒಬ್ಬರೇ ಇದ್ದ ಪಕ್ಷದಲ್ಲಿ ವಾಹನವು ಬರುವವರೆಗೆ ಸದರಿಯವರಿಗೆ ಸುರಕ್ಷತೆಯನ್ನು ನೀಡುವುದು ಮತ್ತು ಮಹಿಳಾ ಪ್ರಯಾಣಿಕರನ್ನು ಸುರಕ್ಷಿತವಾಗಿ ಅವರ ಊರನ್ನು ಮುಟ್ಟಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳುವಂತೆ ಚಾಲನಾ ಸಿಬ್ಬಂದಿಗಳಿಗೆ ಸೂಚಿಸಲಾಗಿದೆ.
- ಮಹಿಳಾ ಪ್ರಯಾಣಿಕರು ಒಂದು ಆಸನವನ್ನು ಕಾಯ್ದಿರಿಸಿದಲ್ಲಿ, ಪಕ್ಕದ ಆಸನವನ್ನು ಮಹಿಳಾ ಪ್ರಯಾಣಿಕರಿಗೆ ಮಾತ್ರ ಕಾಯ್ದಿರಿಸಲು ಸಾಧ್ಯವಾಗುವಂತೆ ತಂತ್ರಾಂಶವನ್ನು ರೂಪಿಸಲಾಗಿರುತ್ತದೆ. ಇದರಿಂದ, ಒಬ್ಬರೇ ಪ್ರಯಾಣಿಸುವ ಮಹಿಳಾ ಪ್ರಯಾಣಿಕರ ಸುರಕ್ಷತೆ ಹೆಚ್ಚಿಸಲಾಗಿದೆ.
- ಸಂಸ್ಥೆಗಳ ವ್ಯಾಪ್ತಿಯ ಬಸ್ ನಿಲ್ದಾಣಗಳಲ್ಲಿ ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯ ವ್ಯವಸ್ಥೆ ಕಲ್ಪಿಸಲಾಗಿದೆ.

**ಬೆಂ.ಮ.ಸಾ.ಸಂಸ್ಥೆ:**

- ಸಂಸ್ಥೆಯಲ್ಲಿ ಪ್ರಸ್ತುತ ಸಾಮಾನ್ಯ ಬಸ್ಸುಗಳಲ್ಲಿ 08 ಆಸನಗಳನ್ನು ಮತ್ತು ವಜ್ರ ಹವಾನಿಯಂತ್ರಿತ ಸಾರಿಗೆ ಸೇವೆಗಳಲ್ಲಿ 2 ಆಸನಗಳನ್ನು ಮಹಿಳೆಯರಿಗೆ ಕಾಯ್ದಿರಿಸಲಾಗಿದೆ ಹಾಗೂ ಮಹಿಳಾ ಪ್ರಯಾಣಿಕರ ಸುರಕ್ಷತೆಗಾಗಿ ಕೆಳಕಂಡಂತೆ ಸಿಬ್ಬಂದಿಗಳಿಗೆ ಮಾರ್ಗದರ್ಶನ ನೀಡಲಾಗಿದೆ.
- ಮಹಿಳಾ ಪ್ರಯಾಣಿಕರೊಂದಿಗೆ ಸೌಜನ್ಯದಿಂದ ಮತ್ತು ಗೌರವದಿಂದ ನಡೆದುಕೊಳ್ಳುವಂತೆ ಹಾಗೂ ಸಹ ಪ್ರಯಾಣಿಕರು ಮಹಿಳಾ ಪ್ರಯಾಣಿಕರೊಂದಿಗೆ ಅಸಭ್ಯವಾಗಿ ವರ್ತಿಸಿದರೆ ಅದನ್ನು ಚಾಲಕ ಅಥವಾ ನಿರ್ವಾಹಕರ ಗಮನಕ್ಕೆ ತರುವಂತೆ ಸೂಚಿಸಲಾಗಿದೆ.
- ಮಹಿಳಾ ಪ್ರಯಾಣಿಕರಿಗೆ ಅನುಕೂಲ ಮಾಡಿಕೊಡುವ ದೃಷ್ಟಿಯಿಂದ ನಿಗಮದ ಸಾರಿಗೆಗಳಲ್ಲಿ ಮಹಿಳೆಯರಿಗೆ ಮೀಸಲಿರಿಸಿರುವ ಆಸನಗಳನ್ನು ಮಹಿಳೆಯರಿಗೆ ಲಭ್ಯವಾಗುವಂತೆ ನೋಡಿಕೊಳ್ಳುವುದು. ನಿಗದಿತ ಸ್ಥಳಗಳಲ್ಲಿ ನಿಲುಗಡೆ ನೀಡಿ ಮಹಿಳಾ ಪ್ರಯಾಣಿಕರು ಹತ್ತಲು/ಇಳಿಯಲು ಅನುಕೂಲ ಮಾಡಿಕೊಡುವುದು.
- ಮಹಿಳಾ ಪ್ರಯಾಣಿಕರಿಗೆ ಸುಗಮ ಪ್ರಯಾಣಕ್ಕೆ ಅನುವು ಮಾಡಿಕೊಡುವುದು. ಮಹಿಳಾ ಪ್ರಯಾಣಿಕರ ದೂರುಗಳಿಗೆ ಸಕಾಲದಲ್ಲಿ ಸಕಾರಾತ್ಮಕವಾಗಿ ಸ್ಪಂದಿಸುವಂತೆ ಹಾಗೂ ಅವಶ್ಯವಿದ್ದಲ್ಲಿ, ಮೇಲಾಧಿಕಾರಿಗಳ ಗಮನಕ್ಕೆ ತರುವಂತೆ ಸೂಚಿಸಲಾಗಿದೆ.
- ಮಹಿಳಾ ಪ್ರಯಾಣಿಕರ ಸುರಕ್ಷತೆಗಾಗಿ ಹಾಗೂ ಸಂಸ್ಥೆಯ ವಾಹನಗಳ ವ್ಯವಸ್ಥಿತ ಕಾರ್ಯಾಚರಣೆಯನ್ನು ಪರಿವೀಕ್ಷಿಸಲು 25 ಪಿಂಕ್ ಸಾರಥಿ ಗಸ್ತು ವಾಹನಗಳನ್ನು ನಗರ ಹಾಗೂ ಹೊರವಲಯಗಳಲ್ಲಿ ಕಾರ್ಯಾಚರಣೆ ಮಾಡಲಾಗುತ್ತಿದೆ. ಮಹಿಳೆಯರಿಗೆ ಲಘು ವಾಹನ ತರಬೇತಿಯನ್ನು ನೀಡಲು 07 ಕಾರುಗಳನ್ನು ಹಾಗೂ 04 ಬೊಲೆರೋ ಜೀಪುಗಳನ್ನು ಖರೀದಿಸಲಾಗಿರುತ್ತದೆ.
- ಮಹಿಳಾ ಪ್ರಯಾಣಿಕರಿಗೆ ಹೆಚ್ಚಿನ ಸುರಕ್ಷತೆಯನ್ನು ಒದಗಿಸಲು, ಬಸ್ಸುಗಳಲ್ಲಿ ಪ್ಯಾನಿಕ್ ಬಟನ್, ಇನ್ ಬಸ್ ಸರ್ವೈಯಲೆನ್ಸ್ (ಸಿಸಿ ಟಿವಿ ಕ್ಯಾಮೆರಾ) ಹಾಗೂ SOS ಬಟನ್ ಹಾಗೂ ಟ್ರಾಕಿಂಗ್ ವ್ಯವಸ್ಥೆಯನ್ನೊಳಗೊಂಡ ಮೊಬೈಲ್ ಅಪ್ಲಿಕೇಷನ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕ್ರಮ ಕೈಗೊಂಡಿರುತ್ತದೆ.
- ಸದರಿ ಯೋಜನೆಯಲ್ಲಿ ಮಹಿಳಾ ಪ್ರಯಾಣಿಕರಿಗೆ ಸಂಸ್ಥೆಯ ಬಸ್ಸುಗಳಲ್ಲಿ ಯಾವುದೇ ಅಹಿತಕರ ಘಟನೆ ನಡೆದಲ್ಲಿ ಅಂತಹ ಸಮಯದಲ್ಲಿ ಬಸ್ಸಿನಲ್ಲಿ ಅಳವಡಿಸಲಾದ ಪ್ಯಾನಿಕ್ ಬಟನ್ ಅಥವಾ ಮೊಬೈಲ್ ಅಪ್ಲಿಕೇಷನ್ ನಲ್ಲಿ ಒದಗಿಸಲಾದ SOS ಬಟನ್ ಅನ್ನು ಒತ್ತಿದಾಗ, ಸದರಿ ಘಟನೆಯ ಬಗ್ಗೆ ಕಂಟ್ರೋಲ್ ರೂಂಗೆ ಅಲರ್ಟ್ ನೀಡಲು ಸಹಾಯ ಮಾಡುತ್ತದೆ ಹಾಗೂ ಸಾರಥಿ ಪಡೆಯು ತತ್‌ಕ್ಷಣದಲ್ಲಿ ಘಟನೆ ನಡೆಯುವ ಸ್ಥಳಕ್ಕೆ ತಲುಪಲು ಅವಶ್ಯವಿರುವ ಲೊಕೇಷನ್ ಮಾಹಿತಿಯನ್ನು ಕಳುಹಿಸುತ್ತದೆ. ಅಲ್ಲದೆ, ಸದರಿ ಬಸ್ಸಿನಲ್ಲಿ ಅಳವಡಿಸಲಾದ ಕ್ಯಾಮೆರಾ ಮೂಲಕ ಬಟನ್ ಒತ್ತಿದ 30 ಸೆಕೆಂಡ್ ಮೊದಲಿನ ಹಾಗೂ 30 ಸೆಕೆಂಡ್ ನಂತರದ, ವೀಡಿಯೋ ಸೆಂಟ್ರಲ್ ಸರ್ವರ್ ಹಾಗೂ ನಿಯಂತ್ರಣ ಕೊಠಡಿಗೆ ರವಾನಿಸುವ ಮೂಲಕ ಮಹಿಳಾ ಸುರಕ್ಷತೆಗೆ ಪೂರಕ ಮಾಹಿತಿಯನ್ನು ಒದಗಿಸುತ್ತದೆ.
- ಮಹಿಳಾ ಪ್ರಯಾಣಿಕರ ರಕ್ಷಣೆಗಾಗಿ 5000 ಬಸ್ಸುಗಳಲ್ಲಿ Automatic Vehicle Locating System (AVLS) ಮತ್ತು ಸಿಸಿ ಕ್ಯಾಮರಾಗಳನ್ನು ಅಳವಡಿಸಲು ಯೋಜಿಸಲಾಗಿದೆ. ಬೆಂ.ಮ.ಸಾ.ಸಂಸ್ಥೆಯ ಎಲ್ಲಾ ಬಸ್ ನಿಲ್ದಾಣಗಳಲ್ಲಿ ಮಹಿಳಾ ಪ್ರಯಾಣಿಕರಿಗಾಗಿ ಪ್ರತ್ಯೇಕ ಶೌಚಾಲಯಗಳು ಲಭ್ಯವಿರುತ್ತದೆ. ಸಂಸ್ಥೆಯ 14 ಬಸ್ ನಿಲ್ದಾಣಗಳಲ್ಲಿ ಮಹಿಳೆಯರಿಗಾಗಿ ಪ್ರತ್ಯೇಕ ಹವಾನಿಯಂತ್ರಿತ ವಿಶ್ರಾಂತಿ ಗೃಹಗಳ ಸೌಲಭ್ಯವನ್ನು ಒದಗಿಸಲಾಗಿರುತ್ತದೆ.